

# ಕರ್ನಾಟಕ ವಿಧಾನ ಪರಿಷತ್ತು.

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : | 1939 |
| ಸದಸ್ಯರ ಹೆಸರು : | ಶ್ರೀ ಕೆ.ಸಿ. ಕೊಂಡಯ್ಯ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ) |
| ಉತ್ತರಿಸಬೇಕಾದ ದಿನಾಂಕ : | 23-03-2021 |
| ಉತ್ತರಿಸುವವರು : | ಪೌರಾಡಳಿತ ಮತ್ತು ಸಕ್ಕರೆ ಸಚಿವರು |

| ಕ್ರ.ಸ | ಪ್ರಶ್ನೆ | ಉತ್ತರ |
|---|---|---|
| ಅ) | ರಾಮನಗರ ಜಿಲ್ಲೆ ರಾಮನಗರ ಟೌನ್ ವ್ಯಾಪ್ತಿಗೆ ಒಳಪಟ್ಟಿರುವ ಜೀಗೇನಹಳ್ಳಿ ಗ್ರಾಮದ ಗ್ರಾಮಠಾಣೆಯ (ವೂರು) ವ್ಯಾಪ್ತಿಯಲ್ಲಿ ಬರುವ ನಿವೇಶನದಾರರ/ ಕಟ್ಟಡದಾರರ ಹೆಸರು ಅಳತೆ ಮತ್ತು ಖಾತೆಯ ಸಂಖ್ಯೆ ನೀಡಲಾಗುವುದೇ; | ನಗರಸಭಾ ವ್ಯಾಪ್ತಿಗೆ ಬರುವ ಜೀಗೇನಹಳ್ಳಿ ಗ್ರಾಮದ ಗ್ರಾಮಠಾಣೆಯ (ಊರು) ವ್ಯಾಪ್ತಿಯಲ್ಲಿ ಬರುವ ನಿವೇಶನ/ಕಟ್ಟಡದಾರರ ವಿವರವನ್ನು ಸದರಿ ಗ್ರಾಮ ಪಂಚಾಯತಿಯಿಂದ ನಗರಸಭೆಗೆ ಹಸ್ತಾಂತರಿಸಲಾದ ಡಿಮ್ಯಾಂಡ್ ರಿಜಿಸ್ಟರ್‌ನಂತೆ ನಗರಸಭೆಯ ಎಂ.ಎ.ಆರ್-19 ವಹಿಯಲ್ಲಿ ದಾಖಲಿಸಿರುವಂತೆ ನಿವೇಶನ/ಕಟ್ಟಡಗಳಿಗೆ ಹೆಸರು, ಅಳತೆ ಮತ್ತು ಖಾತೆ ಸಂಖ್ಯೆಯನ್ನು ನೀಡಲಾಗುತ್ತಿದೆ. |
| ಆ) | ಸದರಿ ಗ್ರಾಮಠಾಣೆಯ ವ್ಯಾಪ್ತಿಯಲ್ಲಿ ರಸ್ತೆ ಮತ್ತು ಚರಂಡಿ ನಿರ್ಮಾಣ ಇಲ್ಲದೇ ಮಳೆಗಾಲದಲ್ಲಿ ಇಲ್ಲಿನ ನಿವಾಸಿಗಳಿಗೆ ತೊಂದರೆಯಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಜೀಗೇನಹಳ್ಳಿ ಗ್ರಾಮ ಠಾಣೆಯ ನಗರಸಭೆ ವ್ಯಾಪ್ತಿಯಲ್ಲಿ ಮೂಲಭೂತ ಸೌಕರ್ಯಗಳಾದ ರಸ್ತೆ ಮತ್ತು ಚರಂಡಿಗಳನ್ನು ಪೂರ್ಣ ಪ್ರಮಾಣದಲ್ಲಿ ಕೈಗೊಂಡಿರುವುದಿಲ್ಲ. ಸದರಿ ಮೂಲಭೂತ ಸೌಕರ್ಯಗಳು ಪೂರ್ಣ ಪ್ರಮಾಣದಲ್ಲಿ ಇಲ್ಲದೆ ಇರುವುದು ಸರ್ಕಾರದ ಗಮನಕ್ಕೆ ಬಂದಿರುತ್ತದೆ. |
| ಇ) | ಸದರಿ ಬಡಾವಣೆಗೆ ರಸ್ತೆ ಮತ್ತು ಚರಂಡಿ ನಿರ್ಮಾಣ ಕಾಮಗಾರಿಯನ್ನು ಕೈಗೊಳ್ಳಲು ಅಗತ್ಯ ಕ್ರಮ ಕೈಗೊಳ್ಳಲಾಗುವುದೇ? | ಸದರಿ ರಾಮನಗರ ನಗರಸಭೆ 27ನೇ ವಾರ್ಡಿಗೆ ಒಳಪಡುವ ಜೀಗೇನಹಳ್ಳಿ ಗ್ರಾಮದ ಗ್ರಾಮಠಾಣೆ (ಊರು) ವ್ಯಾಪ್ತಿಯಲ್ಲಿ ಸರ್ಕಾರದಿಂದ ಬಿಡುಗಡೆಯಾಗುವ ಅನುದಾನದ ಲಭ್ಯತೆಯ ಆಧಾರದ ಮೇಲೆ ಕಾಮಗಾರಿಯನ್ನು ಕೈಗೊಳ್ಳಲಾಗುತ್ತಿರುತ್ತದೆ. ಹಾಗೂ ಕಳೆದ ಐದು ವರ್ಷಗಳಡಿ ವಿವಿಧ ಅನುದಾನಗಳಡಿ ಮೂಲಭೂತ ಸೌಕರ್ಯಗಳಾದ ನೀರು ಸರಬರಾಜು, ಒಳಚರಂಡಿ ಮತ್ತು ವಿದ್ಯುತ್, ಚರಂಡಿ ಹಾಗೂ ರಸ್ತೆ ಸೌಲಭ್ಯಗಳನ್ನು ಒದಗಿಸಿರುತ್ತದೆ. ವಿವರಗಳು ಈ ಕೆಳಕಂಡಂತಿದೆ.<br><br>1) ನಗರೋತ್ಥಾನ: ನಗರೋತ್ಥಾನ (ಮುನಿಸಿಪಾಲಿಟಿ) 2ನೇ ಮತ್ತು 3ನೇ ಹಂತದಡಿ ರೂ. 90.00 ಲಕ್ಷಗಳ ರಸ್ತೆ ಮತ್ತು ಚರಂಡಿ ನಿರ್ಮಾಣ ಕಾಮಗಾರಿಗಳನ್ನು ಕೈಗೊಂಡು ಪೂರ್ಣಗೊಳಿಸಲಾಗಿರುತ್ತದೆ.<br><br>2) 14ನೇ ಹಣಕಾಸು ಆಯೋಗದ ಅನುದಾನ (2015-16 ರಿಂದ 2019-20): 14ನೇ ಹಣಕಾಸು ಆಯೋಗದ ಅನುದಾನದಡಿ 2015-16ನೇ ಸಾಲಿನಿಂದ 2019-20ನೇ ಸಾಲಿನ ವರೆಗೆ ಒಟ್ಟು ರೂ. 62.58 ಲಕ್ಷಗಳ ಮೊತ್ತದ ರಸ್ತೆ ಮತ್ತು ಚರಂಡಿ ನಿರ್ಮಾಣ |

| | | |
|---|---|---|
| | | ಕಾಮಗಾರಿ ಒಳಗೊಂಡಂತೆ ಮೂಲಭೂತ ಸೌಕರ್ಯಗಳಾದ ನೀರು ಸರಬರಾಜು, ಒಳಚರಂಡಿ, ಬೀದಿದೀಪ ಕಾಮಗಾರಿಗಳನ್ನು ಕೈಗೊಂಡು, ಪೂರ್ಣಗೊಳಿಸಲಾಗಿದೆ ಹಾಗು 14ನೇ ಹಣಕಾಸು ಆಯೋಗದ ಅನುದಾನದಡಿ ಉಳಿತಾಯ ಮೊತ್ತ ರೂ. 29.65 ಲಕ್ಷಗಳ ರಸ್ತೆ ಮತ್ತು ಚರಂಡಿ ಕಾಮಗಾರಿಗಳನ್ನು ಕೈಗೊಂಡಿದ್ದು, ಸದರಿ ಕಾಮಗಾರಿಯು ಸದರಿ ಕಾಮಗಾರಿಯು ಟೆಂಡರ್ ಪ್ರಕ್ರಿಯೆಯಲ್ಲಿದೆ.<br><br>3) 15ನೇ ಹಣಕಾಸು ಆಯೋಗದ ಅನುದಾನ (2020-21): 2020-21ನೇ ಸಾಲಿನ 15ನೇ ಹಣಕಾಸು ಆಯೋಗದ ಅನುದಾನದ ಮುಕ್ತ ಅನುದಾನದಲ್ಲಿ ರೂ. 20.00 ಲಕ್ಷಗಳ ರಸ್ತೆ ಮತ್ತು ಚರಂಡಿ ಕಾಮಗಾರಿಗಳನ್ನು ಕೈಗೊಳ್ಳಲಾಗಿದೆ. ಸದರಿ ಕಾಮಗಾರಿಯು ಟೆಂಡರ್ ಪ್ರಕ್ರಿಯೆಯಲ್ಲಿದೆ.<br><br>4) ಎಸ್.ಎಫ್.ಸಿ. ವಿಶೇಷ ಅನುದಾನ: 2018-19ನೇ ಸಾಲಿನ ಎಸ್.ಎಫ್.ಸಿ. ವಿಶೇಷ ಅನುದಾನದಡಿ ರೂ. 41.00 ಲಕ್ಷಗಳ ರಸ್ತೆ ಮತ್ತು ಚರಂಡಿ ನಿರ್ಮಾಣ ಕಾಮಗಾರಿಗಳನ್ನು ಕೈಗೊಂಡು ಪೂರ್ಣಗೊಳಿಸಲಾಗಿರುತ್ತದೆ. |

ಸಂಖ್ಯೆ: ನಅಇ 55 ಜಿಇಎಲ್ 2021

(ಎನ್.ನಾಗರಾಜು, ಎಂ.ಟಿ.ಬಿ)
ಪೌರಾಡಳಿತ ಮತ್ತು ಸಕ್ಕರೆ ಸಚಿವರು